ವಿಠ್ಠಲ ಡಿ. ಪೋತದಾರ*

# ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಕೆಲವು ತೆರಿಗೆಗಳು-ಒಂದು ಅಧ್ಯಯನ

ನಮ್ಮ ಪ್ರಾಚೀನ ಇತಿಹಾಸವನ್ನು ಅಭ್ಯಸಿಸಿದಾಗ, ಇತಿಹಾಸದ ಒಂದು ಭಾಗವಾಗಿ ಪ್ರಾಚೀನ ಕಾಲದ ಅರ್ಥವ್ಯವಸ್ಥೆ ಒಂದು ಪ್ರಮುಖವಾದ ಸ್ಥಾನವನ್ನು ಪಡೆದುದನ್ನು ನಾವು ಕಾಣುತ್ತೇವೆ. ನಮ್ಮ ಪ್ರಾಚೀನರಿಗೂ ಒಂದು ಸುವ್ಯವಸ್ಥಿತವಾದ ರಾಜ್ಯ ರಾಷ್ಟ್ರದ ಕಲ್ಪನೆಯಿತ್ತು. ಒಂದು ರಾಜ್ಯದ ಚಿತ್ರ ನಮ್ಮ ಮುಂದೆ ಮೂಡಿದಾಗ ಅದು ವ್ಯವಸ್ಥಿತವಾಗಿ ನಡೆಯಲು ಬೇಕಾಗುವ ಅವಶ್ಯಕತೆಗಳ ವಿಚಾರ ಮಾಡುವದು ಸಹಜ. ಈ ಅವಶ್ಯಕತೆಗಳ ವಿಚಾರವೇ ಮೌರ್ಯರ ಕಾಲದಲ್ಲಿ 'ಸಪ್ತಾಂಗಂ ರಾಜ್ಯಂ' ಎನ್ನುವ ಕೌಟಿಲ್ಯನ ತತ್ವಕ್ಕೆ ಹುಟ್ಟು ಹಾಕಿತು. ರಾಜ, ಮಂತ್ರಿಗಳು ರಾಜ್ಯದ ಒಂದು ಪ್ರಮುಖ ಅಂಗವಾಗಿರುವ ಹಾಗೆ ಕೋಶವೂ ಕೂಡ ಸಪ್ತಾಂಗಗಳಲ್ಲಿ ಒಂದು ಸ್ಥಾನ ಪಡೆದಿದೆ. ಈ ರಾಜ ಕೋಶವು ಯಾವಾಗಲೂ ಸಮೃದ್ಧ, ಸುವ್ಯವಸ್ಥಿತವಾಗಿ ಇರಲು ಒಂದು ಅಧಿಕಾರಿಗಳ ಗುಂಪು ಹುಟ್ಟಿಕೊಂಡ ಹಾಗೆಯೆ ಈ ಕೋಶಕ್ಕೆ ನಿಯಮಿತವಾಗಿ ಆದಾಯ ಬರುವಂತೆ ಮಾಡಿಕೊಂಡ ವ್ಯವಸ್ಥೆಯೇ 'ತೆರಿಗೆ ಸಂಗ್ರಹಣೆ' ಅಥವಾ 'ಕರ ಸಂಗ್ರಹಣೆ'.

ನಮ್ಮ ದೇಶದಲ್ಲಿ ಈ 'ತೆರಿಗೆ ವ್ಯವಸ್ಥೆ' ವೇದ ಕಾಲದಿಂದಲೂ ಜಾರಿಯಲ್ಲಿದ್ದುದು ಕಂಡು ಬರುತ್ತದೆ. ಆದರೆ ಈ ಕಾಲದಲ್ಲಿ ಶುಲ್ಕ ಮುಂತಾದ ತೆರಿಗೆಗೆ ಸಂಬಂಧಿಸಿದ ಪದಗಳ ಬಳಕೆ ಕಂಡು ಬಂದರೂ ತೆರಿಗೆಯ ವೈವಿಧ್ಯತೆ ಇದ್ದ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ. ಈ ಅರ್ಥವ್ಯವಸ್ಥೆ ಅಥವಾ ರಾಜ್ಯದ ಅರ್ಥವ್ಯವಸ್ಥೆಗೆ (public finance) ಒಂದು ನಿರ್ದಿಷ್ಟವಾದ ರೂಪ ದೊರೆತದ್ದು ಮೌರ್ಯರ ಕಾಲದಲ್ಲಿಯೇ ಕೌಟಿಲ್ಯನ 'ಅರ್ಥಶಾಸ್ತ್ರ'ದಂತಹ ಗ್ರಂಥಗಳು ಅರ್ಥವ್ಯವಸ್ಥೆಯ ಸ್ವರೂಪ ಮತ್ತು ಅದರ ಎರಡು ಅಂಗಗಳಾದ ತೆರಿಗೆಯ ಸಂಗ್ರಹಣೆ (Tax ಅಥವಾ Revenue collection) ಮತ್ತು ಸಾರ್ವಜನಿಕ ವೆಚ್ಚ (public expenditure) ಬಗ್ಗೆ ವಿವರವಾದ ವಿವರಣೆ ನೀಡುತ್ತವೆ. ಹೀಗಾಗಿ ಮೌರ್ಯರ ಅರ್ಥವ್ಯವಸ್ಥೆ ಮುಂದೆ ಆಳಿದ ಎಲ್ಲ ಸಾಮ್ರಾಜ್ಯಗಳಿಗೂ ಒಂದು ಮಾದರಿಯಾಯಿತು. ಈ ರಾಜ ವಂಶಗಳು ಮೌರ್ಯರ ಅರ್ಥವ್ಯವಸ್ಥೆಯನ್ನೂ ತಮಗೆ ಅನುಕೂಲವಾಗುವಂತೆ ಅಲ್ಪ ಸ್ವಲ್ಪ ಮಾರ್ಪಾಡುಗಳೊಂದಿಗೆ ಬದಲಾಯಿಸಿಕೊಂಡರೂ ಹೆಚ್ಚಿನ ಅಂಶಗಳು ಹಾಗೆಯೇ ಮುಂದುವರೆದವು. ಮುಂದೆ ಕರ್ನಾಟಕದಲ್ಲಿ ಆಳಿದ ಕದಂಬರಿಂದ ಹಿಡಿದು ವಿಜಯನಗರದವರೆಗಿನ ರಾಜ ವಂಶಗಳು ಕೂಡ ತಮ್ಮ ಅರ್ಥವ್ಯವಸ್ಥೆಯಲ್ಲಿ ಈ ಅಂಶಗಳನ್ನು ಅಳವಡಿಸಿಕೊಂಡುದನ್ನು ಕಾಣಬಹುದು. ಪ್ರಸ್ತುತ ಲೇಖನದ ಉದ್ದೇಶ ಪ್ರಾಚೀನ ಕರ್ನಾಟಕದ ಅರ್ಥವ್ಯವಸ್ಥೆಯಲ್ಲಿ ಕಂಡು ಬರುವ ತೆರಿಗೆಗೆ ಸಂಬಂಧಿಸಿದ ಕೆಲವು ಕುತೂಹಲ ಕಾರಕ ಪದಗಳ ಅರ್ಥವಿಶ್ಲೇಷಣೆ ಆಗಿದೆ. ಈ ಪದಗಳನ್ನು

---

* ಸಂಶೋಧನ ವಿದ್ಯಾರ್ಥಿ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩

ಆಯಾ ವಿಭಾಗಕ್ಕೆ ಸಂಬಂಧಿಸಿದಂತೆ ವಿಭಾಗಿಸಿ ಅಭ್ಯಸಿಸಲಾಗಿದೆ.

## I. ಅರ್ಥವ್ಯವಸ್ಥೆಗೆ ಸಂಬಂಧಿಸಿದ ಸಾಮಾನ್ಯ ಪದಗಳು

೧. ಅಪೂರ್ವ ಆಯ—ತೆರಿಗೆಯ ಹೆಸರೇ ಸೂಚಿಸುವಂತೆ ಈ ತೆರಿಗೆಯನ್ನು ವಿಶಿಷ್ಟ ಸಂದರ್ಭಗಳಲ್ಲಿ ವಿಧಿಸಿರಬೇಕು. ರಾಜನು ಒಂದು ಮಹತ್ವಾಕಾಂಕ್ಷಿ ಯೋಜನೆಯನ್ನು ಕೈಗೊಂಡಾಗ ಹಣದ ಕೊರತೆ ಉಂಟಾದಾಗ ಈ ತೆರಿಗೆಯನ್ನು ವಿಧಿಸಿರಬೇಕು. ಇದನ್ನೊಂದು Surcharge ಎನ್ನಲು ಅಡ್ಡಿಯಿಲ್ಲ.

ವಿಶೇಷ ಆದಾಯ, ವಿಶೇಷ ಚೂರಾದಾಯ ಎಂಬ ತೆರಿಗೆಗಳೂ ಕೂಡ ಅಪೂರ್ವ ಆಯವನ್ನೇ ಹೋಲುತ್ತವೆ.

## II. ಒಕ್ಕಲುತನದ ತೆರಿಗೆಗಳು

೧. ಕಟುದೆರೆ, ಕಟುತೆರೆ—ಧಾನ್ಯಗಳ ವಿಶೇಷವಾಗಿ ಅಕ್ಕಿಯ ಮೂಟೆಯ ಮೇಲೆ ವಿಧಿಸುವ ಕರವಾಗಿತ್ತು. ಬಹುಶಃ ಈ ತೆರಿಗೆಯನ್ನು ಭತ್ತದ ಕೃಷಿ, ಮಾರಾಟ ಹೆಚ್ಚಿಗೆ ಇದ್ದ ಸ್ಥಳಗಳಲ್ಲಿ ವಿಧಿಸುತ್ತಿದ್ದಿರಬೇಕು.

೨. ಕವಣಾಯ—ಹುಲ್ಲುಗಾವಲಿನ ತೆರಿಗೆಯಿಂದ ಬರುವ ಆದಾಯ

೩. ಕೆಳವತ್ತ—ಭತ್ತದ ಕಣದಿಂದ ಭತ್ತದ ರೂಪವಾಗಿ ಕೊಡುವ ಸುಂಕ ಇದಾಗಿತ್ತು.

೪. ಖಾಣೆ—ಮೇವಿನ ಮೇಲಿನ ತೆರಿಗೆ

೫. ಗುಳಿದೆರೆ, ಕುಳಿದೆರೆ—ತೋಟದಲ್ಲಿಯ ಗಿಡಗಳನ್ನು ನೆಡುವ ಕುಣಿಗಳ ಮೇಲಿನ ಕರ; ತೋಟದ ಬಾವಿಯ ಮೇಲಿನ ಕರ. ಕುಳಿದೆರೆ ತೋಟದಲ್ಲಿ ನೆಟ್ಟ ಗಿಡಗಳನ್ನು ಎಣಿಸಿ ಅವುಗಳ ಮೇಲೆ ವಿಧಿಸುವ ಕರವಾಗಿತ್ತು.

೬. ತಿಪ್ಪೆಯ ಸುಂಕ—ತಿಪ್ಪೆಗಳ ಮೇಲಿನ ಸುಂಕ. ಇದು ತಿಪ್ಪೆಗಳಲ್ಲಿ ಸಂಗ್ರಹಿಸಿದ ಗೊಬ್ಬರದ ಮೇಲಿನ ಸುಂಕವಾಗಿತ್ತು.

೭. ನಲ್ಲಾವು, ನಲ್ಲೆತ್ತು, ನಲ್ಲೆಮ್ಮೆ—ಒಳ್ಳೆಯ ಜಾತಿಯ ಹಸು, ಎತ್ತು ಮತ್ತು ಎಮ್ಮೆಗಳ ಮೇಲಿನ ತೆರಿಗೆ.

೮. ಬಣಬೆದೆರೆ—ಬಣಿವೆಯ ಮೇಲಿನ ತೆರಿಗೆ.

೯. ಸೊಪ್ಪೆ ಬಿರಾಡ—ಮೇವಿನ ಮೇಲಿನ ತೆರಿಗೆ. ಸೊಪ್ಪು ಎಂಬ ಶಬ್ದವನ್ನು ಮೇವು ಅಥವಾ ಹಸಿಮೇವು ಎಂದು ಅರ್ಥೈಸಬಹುದು.

೧೦. ಹುಲು ಬನ್ನಿ—ದನ ಮೇಯಿಸುವ ಹುಲ್ಲುಗಾವಲಿನ ಮೇಲಿನ ಕರ. ಆಗಿನ ಕಾಲದ ಅರ್ಥವ್ಯವಸ್ಥೆ ಕೃಷಿ ಪ್ರಧಾನವಾದಗಿದ್ದುದರಿಂದ, ಕೃಷಿಗೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳ ಮೇಲೂ ಕರ ವಿಧಿಸಿದುದನ್ನು ಕಾಣಬಹುದು.

## III. ಸುಂಕಗಳು

೧. ಹೊಳೆಯ ದಂಡೆಯ ಅನುಪು—ಹೊರಗಿನಿಂದ ಹೊಳೆ ದಾಟಿ ಬರುವವರು ಕೊಡಬೇಕಾದ ಸುಂಕ. ಹೊಳೆಗಳು ಹೆಚ್ಚಾಗಿ ರಾಜ್ಯದ ಅಥವಾ ಆಡಳಿತ ವಿಭಾಗಗಳ ಸೀಮೆಗಳಾಗಿರುತ್ತಿದ್ದವು. ಆದ್ದರಿಂದ ಈ ಸುಂಕವು ಹೊಳೆ ದಾಟಿ ಬರುವವರಿಗೆ ಒಂದು ಬಗೆಯ ಜಕಾತಿ ಸುಂಕ (ಪ್ರವೇಶ ತೆರಿಗೆ) ಆಗಿತ್ತೆನ್ನಬಹುದು.

## IV. ವ್ಯಾಪಾರದ ತೆರಿಗೆಗಳು

೧. ಕೊನೆದೆರೆ—ಹಣ್ಣುಗಳ ಗೊನೆಯ ಮೇಲೆ ಹಾಕುವ ತೆರಿಗೆ.

೨. ಪನ್ನವಣ—ವೀಳೆಯದೆಲೆಯ ಮಾರಾಟದ ಮೇಲಿನ ತೆರಿಗೆ.

೩. ಬೀರವಣ—ವೀಳೆಯ ಎಲೆಯ ಕಟ್ಟಿನ ಮೇಲಿನ ತೆರಿಗೆ ಪ್ರಾಚೀನ ಅರ್ಥವ್ಯವಸ್ಥೆಯಲ್ಲಿ ವೀಳೆಯದೆಲೆಯ ಮಾರಾಟ, ಅದರ ಉಪಯೋಗ, ಈ ಉದ್ಯೋಗದಲ್ಲಿ ತೊಡಗಿದವರು ಒಂದು ಪ್ರಮುಖ ಸ್ಥಾನವನ್ನು ಪಡೆದಿದ್ದರೆಂದು ತೋರುತ್ತದೆ. ವೀಳೆಯದೆಲೆಯ ಮಾರಾಟ ರಾಜ್ಯದ ಬೊಕ್ಕಸಕ್ಕೆ ಒಂದು ಪ್ರಮುಖ ಆದಾಯ ತರುವಂತಹದಾಗಿರಬೇಕು. ಆದ್ದರಿಂದಲೇ ಈ ಉದ್ಯೋಗಕ್ಕೆ ಸಂಬಂಧಿಸಿದಂತೆ ಅನೇಕ ತೆರಿಗೆಗಳು ಇದ್ದುದನ್ನು ನಾವು ಕಾಣುತ್ತೇವೆ.

## V. ಸಾರಿಗೆ, ಸಾಗಾಣಿಕೆ ವಾಹನಗಳ ಮೇಲಿನ ಸುಂಕ

೧. ತಳಸಾರಿಗೆ—ರಸ್ತೆ ಸಾಗಾಣಿಕೆಯ ಮೇಲಿನ ಸುಂಕ. ಈ ತೆರಿಗೆಯನ್ನು ಗಮನಿಸಿದಾಗ ರಸ್ತೆಗಳು ರಾಜ್ಯದ ಸೊತ್ತಾಗಿರಬೇಕು ಎನಿಸುತ್ತದೆ. ಅವುಗಳ ನಿರ್ವಹಣೆಗಾಗಿ ತೆರಿಗೆ ರೂಪದಲ್ಲಿ ಸಂಗ್ರಹಿಸಿದ ಹಣವನ್ನು ಬಳಸುತ್ತಿರಬಹುದು. ಮಾರ್ಗಗಳನ್ನು ಉಪಯೋಗಿಸುವವರು ಅದರ ನಿರ್ವಹಣೆಗಾಗಿ ಸುಂಕ ಕೊಡಬೇಕಾಗುತ್ತದೆಂದು 'ಶುಕ್ರ ನೀತಿ'ಯಲ್ಲಿ ಹೇಳಲಾಗಿದೆ.

೨. ಪಸುಬೆದೆರೆ—ವ್ಯಾಪಾರಕ್ಕಾಗಿ ಹಸೂಬೆಯಲ್ಲಿ ಸಾಗಿಸುತ್ತಿದ್ದ ಸರಕುಗಳ ಮೇಲಿನ ಕರ.

೩. ಹೊಳೆಯ ಸುಂಕ—ಹೊಳೆ ದಾಟುವ ನಾವೆಗಳ ಮೇಲಿನ ಕರ. ಈ ತೆರಿಗೆಯನ್ನು ಹೊಳೆಯ ಉಪಯೋಗ ಮಾಡಿಕೊಳ್ಳುವವರ ಮೇಲೂ ವಿಧಿಸಿರಬೇಕು (ಹೊಳೆಯ ಮೂಲಕ ನಡೆಯುವಂತಹ ವಹಿವಾಟಿನ ಮೇಲೆ ನಿಯಂತ್ರಣವಿರಿಸಿಕೊಳ್ಳುವುದಕೋಸ್ಕರ) ಇಂತಹ ಕರಗಳನ್ನು ಸಂಗ್ರಹಿಸುವ ಅಧಿಕಾರಿಗೆ 'ಅರ್ಥಶಾಸ್ತ್ರ'ದಲ್ಲಿ 'ನೌ ಅಧ್ಯಕ್ಷ' ಎಂಬ ಉಲ್ಲೇಖವು ಬರುತ್ತದೆ.

## VI. ಕೈಗಾರಿಕೆಗಳ ಮೇಲಿನ ಕರ

೧. ಆವೆದೆರೆ*—ಆವೆಯನ್ನು ಹಿಡಿಯುವ ಗುತ್ತಿಗೆಯ ಮೇಲೆ ಕೊಡಬೇಕಾದ ತೆರಿಗೆ. ಆವೆಗಳನ್ನು ಹಿಡಿದುದುಂದೆ ಅವುಗಳ ಉಪಯೋಗವೇನು ಎಂಬುದನ್ನು ವಿವರಿಸುವುದು ಕಷ್ಟ. ಬಹುಶಃ ಅವುಗಳನ್ನು ಹಿಡಿದುತಂದು ನೀರಿನ ಸ್ವಚ್ಛತೆ ಕಾಯ್ದುಕೊಳ್ಳಲು ಕೆರೆ, ಬಾವಿಗಳಲ್ಲಿ ಬಿಡುತ್ತಿರಬಹುದು.

೨. ಯೆರೆಪಿಂಡಿ ಸುಂಕ—ಎಣ್ಣೆಯ ಹಿಂಡಿಯ ಮೇಲಿನ ಸುಂಕ. ಎಣ್ಣೆಯ ಉದ್ಯಮ ಕೂಡ ಒಂದು ಪ್ರಮುಖ ಕೈಗಾರಿಕೆಯಾಗಿತ್ತು. ಈ ತೆರಿಗೆಯ ಜೊತೆಗೆ 'ಗಾಣದೆರೆ' ಎಂಬ ಪದವನ್ನು ಕೂಡ ಗಮನಿಸಬಹುದು.

೩. ಲವಣ—ಉಪ್ಪಿನ ಮೇಲಿನ ಕರ

## VII. ವೃತ್ತಿ ತೆರಿಗೆ

೧. ಕನ್ನಡಿ ವಣ—ಕನ್ನಡಿಯ ಮೇಲೆ ಹಾಕುತ್ತಿದ್ದ ತೆರಿಗೆ ; ದೇವಾಲಯಗಳಲ್ಲಿನ ನೃತ್ಯಗಾರ್ತಿಯರ ಮೇಲಿನ ಕರ. ಕನ್ನಡಿ ಶೃಂಗಾರ ಸಾಧನಗಳಲ್ಲಿ ಒಂದು. ನೃತ್ಯಗಾರ್ತಿಯರಿಗೆ ಇದರ ಉಪಯೋಗ ಹೆಚ್ಚಾಗಿತ್ತು. ಆದ್ದರಿಂದ ಕನ್ನಡಿಯ ಮೇಲೆ ತೆರಿಗೆ ವಿಧಿಸಿದ್ದರು.

೨. ಕಂಠವಣ—ಕಂಠದ ಮೇಲೆ ವಿಧಿಸುವ ತೆರಿಗೆ ; ಹಸ್ತಪ್ರತಿ ಲಿಪಿಗಾರನ ಮೇಲೆ ವಿಧಿಸುವ ತೆರಿಗೆ.

೩. ಚಕ್ರಕಾಣಿಕೆ — ಕುಂಬಾರನ ತಿಗರಿಯ ಮೇಲಿನ ಕರ

೪. ಏಣಿ—ಎಲೆ ಕೊಯ್ಯುವಾಗ ಉಪಯೋಗಿಸುವ ಏಣಿಯ ಮೇಲೆ ಹಾಕುವ ತೆರಿಗೆ

೫. ಹೊಗೆದೆರೆ—ಕಮ್ಮಾರನ ವೃತ್ತಿಯ ಮೇಲೆ ವಿಧಿಸುವ ತೆರಿಗೆ. ಬಹುಶಃ ಈ ತೆರಿಗೆ ಕಮ್ಮಾರನ ಕುಲುಮೆಯ ಮೇಲೆ ವಿಧಿಸುವ ತೆರಿಗೆಯಾಗಿರಬೇಕು.

ಈ ಮೇಲಿನ ತೆರಿಗೆಗಳು ವೃತ್ತಿ ತೆರಿಗೆಗಳು ಆಗಿದ್ದರೂ ಕೂಡ ತೆರಿಗೆಯನ್ನು ವೃತ್ತಿ ಮಾಡುವ ವೃತ್ತಿಕಾರನ ಮೇಲೆ ವಿಧಿಸದೇ ಆತನ ವೃತ್ತಿಯಲ್ಲಿ ಅತ್ಯವಶ್ಯವಾದ ಉಪಕರಣ/ವಸ್ತುವಿನ ಮೇಲೆ ವಿಧಿಸಿದುದು ಒಂದು ವೈಶಿಷ್ಟ್ಯವಾಗಿದೆ. ಈ ಅಂಶಕ್ಕೆ ಹೊರತಾಗಿರುವ ಕೆಲವು ವೃತ್ತಿತೆರಿಗೆಗಳು ಇಂತಿವೆ.

೬. ಜಟ್ಟಿ ತೆರೆ—ಕುಸ್ತಿಪಟುಗಳ ಮೇಲಿನ ಕರ

೭. ನೋಟವಣ—ನಾಣ್ಯ ಪರೀಕ್ಷಕರ ಮೇಲಿನ ಕರ

೮. ದೊಂಬದೆರಿಗೆ—ದೊಂಬರಾಟ ಮಾಡುವವರ ಮೇಲೆ ಆಕರಿಸುವ ತೆರಿಗೆ

## VIII. ಧಾರ್ಮಿಕ ಶುಲ್ಕಗಳು

೧. ರಥವಣ—ರಥೋತ್ಸವಕ್ಕೆ ಬರುವ ಪರಸ್ಥಳದವರ ಮೇಲಿನ ಶುಲ್ಕ

* 'ಆವೆ' ಎಂದರೆ ಕುಂಬಾರರು ಮಡಿಕೆ ಸುಡಲು ಉಪಯೋಗಿಸುತ್ತಿದ್ದ ಒಲೆಯಾಗಿರಬೇಕು. ಸಂ.

## IX. ಸಾಮಾಜಿಕ ಕಾರ್ಯಗಳ ಮೇಲಿನ ಶುಲ್ಕಗಳು

೧. ಅಂಕ—ಮಲ್ಲಯುದ್ಧದ ಗರಡಿಯ ಮೇಲೆ ವಿಧಿಸುವ ಕರ

೨. ಪಟ್ಟಬಂಧ—ಅರಸನ ಪಟ್ಟಮಹೋತ್ಸವದ ಕಾಲಕ್ಕೆ ಆಕರಿಸುವ ತೆರಿಗೆ

೩. ಪುತ್ರೋತ್ಸಾಹ—ಪುತ್ರ ಜನಿಸಿದ ಶುಭ ಸಂದರ್ಭದಲ್ಲಿ ರಾಜನಿಗೆ ಕೊಡಬೇಕಾದ ಶುಲ್ಕ

೪. ಮದುವೆಯ ಸುಂಕ, ಹಂದರ ಹಣ—ಮದುವೆಯ ಶುಭ ಸಂದರ್ಭದಲ್ಲಿ ರಾಜನಿಗೆ ನೀಡಬೇಕಾದ ಶುಲ್ಕ

## X ಇತರ ಪದಗಳು

೧. ಜಾತ್ರಾಮುಖ — ಜಾತ್ರೆಯ ಕಾಲಕ್ಕೆ ಸಂಗ್ರಹಿಸುವ ಕರವಾಗಿರಬಹುದು.

೨. ಬಾಗಿಲು ಜೋಳ — ದವಸಧಾನ್ಯಗಳ ಮೇಲಿನ ಕರ ; ರಾಸಿಯಾದ ಮೇಲೆ ಹೊಸ ಬೆಳೆಯನ್ನು ಮನೆಗೆ ತಂದಾಗ ಧಾನ್ಯ ರೂಪದಲ್ಲಿ ಸಂದಾಯ ಮಾಡಬೇಕಾದ ತೆರಿಗೆ ಇದ್ದಿರಬಹುದು.

ಮೇಲಿನ ವಿವಿಧ ತೆರಿಗೆಗಳಿಗೆ ಸಂಬಂಧಿಸಿದ ಪದಗಳನ್ನು ಗಮನಿಸಿದಾಗ ಸೋಜಿಗವೆನಿಸುತ್ತದೆ. ಅನೇಕ ತೆರಿಗೆಗಳು ಪ್ರಜೆಗಳಿಗೆ ಭಾರವಾಗಿರಬೇಕು ಎನ್ನಿಸಿದರೂ ಅದನ್ನು ಒಪ್ಪಲಾಗದು. ಬದಲಾಗಿ ಇಂದಿನ ದಿನಗಳಲ್ಲಿ ಕಾಣುವ ಅರ್ಥವ್ಯವಸ್ಥೆಯಷ್ಟೆ ಅಚ್ಚುಕಟ್ಟಾದ ವ್ಯವಸ್ಥೆಯನ್ನು ಆಗಲೂ ಕಾಣುತ್ತೇವೆ.